## ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ನ್ಯಾಯಾಂಗ ಇಲಾಖೆ ಇವರ ಜಾಹೀರಾತು

**ಅಧಿಸೂಚನೆ ಸಂಖ್ಯೆ: 1/2009 ಆಡಳಿತ : ದಿನಾಂಕ: 1ನೇ ಆಗಸ್ಟ್ 2009**

**ವಿಷಯ:** ದಾವಣಗೆರೆ ಜಿಲ್ಲಾ ನ್ಯಾಯಾಂಗ ಘಟಕಕ್ಕೆ 1 ಬೆರಳಚ್ಚು ನಕಲುಗಾರ, 6 ಪ್ರೊಸೆಸ್ ಸರ್ವರ್‌ರು, 3 ಜವಾನರ ಹುದ್ದೆಗಳನ್ನು ಹಾಗೂ ಶೀಘ್ರಲಿಪಿಗಾರರ 1 (ಬ್ಯಾಕ್‌ಲಾಗ್) ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** ಗೌ: ಕರ್ನಾಟಕ ಉಚ್ಚ ನಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ II 205/2004 ದಿ: 02.05.2008 ಹಾಗೂ 17.06.2009 ರನ್ವಯ ವಿವಿಧ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ನೀಡಿದ ಅನುಮತಿ.

ದಾವಣಗೆರೆ ಜಿಲ್ಲೆಯ ನ್ಯಾಯಾಲಯಗಳಲ್ಲಿ ಖಾಲಿ ಇರುವ ಈ ಕೆಳಕಂಡ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು ಈ ಅಧಿಸೂಚನೆಯೊಂದಿಗೆ ಲಗತ್ತಿಸಿರುವ ನಿಗದಿತ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳು ಎಲ್ಲಾ ಅಂಕಣಗಳನ್ನು ಭರ್ತಿ ಮಾಡಿ **ದಿನಾಂಕ: 05.09.2009 ರಂದು ಸಂಜೆ 5.00 ಗಂಟೆಯ** ಒಳಗಾಗಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರಿಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 05.09.2009 ಸಂಜೆ 5.00 ಗಂಟೆಯವರೆಗೆ**

**ಹುದ್ದೆಗಳ ವರ್ಗೀಕರಣ:**

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ಮೀಸಲಾತಿ | ಹುದ್ದೆಗಳ ವರ್ಗೀಕರಣ | | | | | |
|---|---|---|---|---|---|---|---|---|---|
| | | | | ಸಾ.ಅ. | ಪ.ಜಾ | ಪ.ಪಂ. | II-ಎ | III-ಎ | III-ಬಿ |
| 1 | ಶೀಘ್ರಲಿಪಿಗಾರರ (ಬ್ಯಾಕ್‌ಲಾಗ್ ಹುದ್ದೆ) | 1 | ಇತರೆ | – | – | 1 | – | – | – |
| 2 | ಬೆರಳಚ್ಚು ನಕಲುಗಾರರು | 1 | ಗ್ರಾಮೀಣ | 1 | – | – | – | – | – |
| 3 | ಪ್ರೊಸೆಸ್ ಸರ್ವರ್ | 6 | ಇತರೆ | 1 | – | – | – | 1 | 1 |
| | | | ಮಹಿಳಾ | 1 | – | – | – | – | – |
| | | | ಗ್ರಾಮೀಣ | 1 | 1 | – | – | – | – |
| 4 | ಜವಾನರು | 3 | ಇತರೆ | – | – | – | 1 | – | – |
| | | | ಮಹಿಳಾ | – | 1 | – | – | – | – |
| | | | ಅಂಗವಿಕಲ | 1 | – | – | – | – | – |

ಸಾ.ಅ. – ಸಾಮಾನ್ಯ ಅರ್ಹತೆ ಪ.ಜಾ. – ಪರಿಶಿಷ್ಟ ಜಾತಿ ಪ.ಪಂ. – ಪರಿಶಿಷ್ಟ ಪಂಗಡ

**1) ವೇತನ ಶ್ರೇಣಿ:**

| | |
|---|---|
| **ಶೀಘ್ರಲಿಪಿಗಾರರು:** | ರೂ.7275–175–7800–200–8600–225–9500–250–10500–300–12300–350–13350 ಮತ್ತು ಇತರೆ ಭತ್ಯೆಗಳು |
| **ಬೆರಳಚ್ಚು ನಕಲುಗಾರರು** | ರೂ.5800–100–6000–125–6500–150–7100–175–7800–200–8600–225–9500–250–10500 ಮತ್ತು ಇತರೆ ಭತ್ಯೆಗಳು |
| **ಪ್ರೊಸೆಸ್ ಸರ್ವರ್** | ರೂ.5200–100–6000–125–6500–150–7100–175–7800–200–8200 ಮತ್ತು ಇತರೆ ಭತ್ಯೆಗಳು |
| **ಜವಾನರು** | ರೂ.4800–100–6000–125–6500–150–7100–175–7275 ಮತ್ತು ಇತರೆ ಭತ್ಯೆಗಳು. |

**2) ವಯೋಮಿತಿ:**

ಕನಿಷ್ಠ: 18 ವರ್ಷಗಳು

ಗರಿಷ್ಠ:
1) ಸಾಮಾನ್ಯ ವರ್ಗ 35 ವರ್ಷ
2) ಪ್ರವರ್ಗ–2ಎ, 2–ಬಿ, 3–ಎ, 3–ಬಿ 38 ವರ್ಷ
3) ಪ.ಜಾ /ಪ.ಪಂ./ಪ್ರವರ್ಗ–1 40 ವರ್ಷ

ಸರ್ಕಾರಿ ಸೇವೆಯಲ್ಲಿರುವವರಿಗೆ ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಮೇಲ್ಕಂಡ ಕನಿಷ್ಠ ವಯೋಮಿತಿಯನ್ನು ಹೊಂದಿರತಕ್ಕದ್ದು ಮತ್ತು ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

**ಟಿಪ್ಪಣಿ:** ಗರಿಷ್ಠ ವಯೋಮಿತಿಯ ಸೌಲಭ್ಯ ಕೋರುವ ಅಭ್ಯರ್ಥಿಯು ವಿಧವೆಯಾಗಿದ್ದರೆ, ಅವಳು ವಿಧವೆಯೆಂಬ ಬಗ್ಗೆ ತಹಶೀಲ್ದಾರರ ದರ್ಜೆಗೆ ಕಡಿಮೆ ಅಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪಡೆದ ಪ್ರಮಾಣ ಪತ್ರಗಳನ್ನು ದ್ವಿಪ್ರತಿಯಲ್ಲಿ ಅರ್ಜಿಯೊಂದಿಗೆ ಲಗತ್ತಿಸಬೇಕು.

**3) ವಿದ್ಯಾರ್ಹತೆ:**

**1) ಶೀಘ್ರಲಿಪಿಗಾರರ ಹುದ್ದೆಗೆ:**

1) ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಬೇಕು.

2) ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆ ಅಥವಾ ಕರ್ನಾಟಕ ಸೆಕೆಂಡರಿ ಪ್ರೌಢ ಶಿಕ್ಷಣ ಪರೀಕ್ಷೆಗಳ ಮಂಡಳಿ ವತಿಯಿಂದ ನಡೆಸಲಾದ ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲಿ ಸೀನಿಯರ್ ದರ್ಜೆಯ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು ಅಥವಾ

3) ಕರ್ನಾಟಕ ತಾಂತ್ರಿಕ ಶಿಕ್ಷಣ ಇಲಾಖಾ ಮಂಡಳಿಯವರಿಂದ ನೀಡಲಾದ ಸೆಕ್ರೆಟರಿಯಲ್ ಪ್ರ್ಯಾಕ್ಟೀಸ್‌ನಲ್ಲಿ ಡಿಪ್ಲೋಮೋ ಪಡೆದವರಾಗಿದ್ದು ಅದರಲ್ಲಿ ಆಂಗ್ಲ ಮತ್ತು ಕನ್ನಡ ಭಾಷೆಗಳೆರಡರಲ್ಲಿ ಬೆರಳಚ್ಚು ಮತ್ತು ಶೀಘ್ರಲಿಪಿ ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆಯ್ದುಕೊಂಡು ಉತ್ತೀರ್ಣರಾಗಿರಬೇಕು.

**2) ಬೆರಳಚ್ಚು-ನಕಲುಗಾರರ ಹುದ್ದೆಗೆ:**

1) ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಬೇಕು.

2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲಿ ಜ್ಯೂನಿಯರ್ ದರ್ಜೆಯ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**3) ಪ್ರೊಸೆಸ್ ಸರ್ವರ್‌ರ (ಜಾರಿಕಾರರ) ಹುದ್ದೆಗೆ:**

ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

(ವಾಹನ ಚಾಲನಾ ಪರವಾನಿಗೆಯನ್ನು ಹೊಂದಿರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು)

**4) ಜವಾನರ ಹುದ್ದೆಗೆ:**

ಎ) 7ನೇ ತರಗತಿಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

ಬಿ) ಕನ್ನಡ ಭಾಷೆ ಓದಲು ಮತ್ತು ಬರೆಯಲು ಬರಬೇಕು.

**4) ಆಯ್ಕೆ ವಿಧಾನ:**

ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು ಮತ್ತು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಹಾಗೂ (ತಿದ್ದುಪಡಿ) ನಿಯಮಗಳು 2007ರ ಮೇರೆಗೆ ಸಂದರ್ಶನದ ಆಧಾರದ ಮೇಲೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗುವುದು.

ಶೀಘ್ರಲಿಪಿಗಾರರು ಹಾಗೂ ಬೆರಳಚ್ಚು ನಕಲುಗಾರರ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಅರ್ಹತಾ ಪರೀಕ್ಷೆ ಮತ್ತು ಈ ಕೆಳಗೆ ನಮೂದಿಸಿರುವಂತೆ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಆಯ್ಕೆ ಮಾಡಿಕೊಳ್ಳಲಾಗುವುದು.

**ಶೀಘ್ರಲಿಪಿಗಾರರ ಹುದ್ದೆಗೆ:**

1) ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರದಿದ ನಾಮ ನಿರ್ದೇಶಿಸಲ್ಪಟ್ಟ ಪರೀಕ್ಷಕರು ಪ್ರತಿ ನಿಮಿಷಕ್ಕೆ 120 ಪದಗಳ ವೇಗದಂತೆ 5 ನಿಮಿಷಗಳಲ್ಲಿ ನೀಡುವ ಉಕ್ತ ಲೇಖನವನ್ನು ಸುಮಾರು 45 ನಿಮಿಷಗಳಲ್ಲಿ ಲಿಪ್ಯಂತರಿಸತಕ್ಕದ್ದು.

2) ಈ ಪರೀಕ್ಷೆಯು ಗರಿಷ್ಠ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಠ 50 ಅಂಕಗಳನ್ನು ಪಡೆಯತಕ್ಕದ್ದು.

**ಬೆರಳಚ್ಚು ನಕಲುಗಾರರ ಹುದ್ದೆಗೆ:**

ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರದಿಂದ ನಾಮನಿರ್ದೇಶಿಸಲ್ಪಟ್ಟ ಅಧಿಕಾರಿಯವರಿಂದ ಸುಮಾರು 15 ನಿಮಿಷಗಳ ಕಾಲ ಉಕ್ತಲೇಖನವನ್ನು ಬೆರಳಚ್ಚುಪಡಿಸತಕ್ಕದ್ದು. ಈ ಪರೀಕ್ಷೆಯು ಗರಿಷ್ಠ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಠ 50 ಅಂಕಗಳನ್ನು ಪಡೆಯತಕ್ಕದ್ದು.

**5) ನಿರೀಕ್ಷಣಾ ಅವಧಿ:**

ನೇಮಕ ಹೊಂದಿದ ಅಭ್ಯರ್ಥಿಗಳು ಎರಡು ವರ್ಷಗಳ ನಿರೀಕ್ಷಣಾ ಅವಧಿಯಲ್ಲಿರತಕ್ಕದ್ದು. ಮತ್ತು ಸದರಿ ಅವಧಿಯಲ್ಲಿ ತಮ್ಮ ಹುದ್ದೆಗಳಿಗೆ ಯಾವುದಾದರೂ ಇಲಾಖಾ ಪರೀಕ್ಷೆಗಳನ್ನು ನಿಯಮದಡಿ ಗೊತ್ತುಪಡಿಸಿದ್ದರೆ ಅವುಗಳಲ್ಲಿ ಉತ್ತೀರ್ಣರಾಗತಕ್ಕದ್ದು.

**6) ಅರ್ಜಿಯೊಂದಿಗೆ ಲಗತ್ತಿಸಬೇಕಾಗಿರುವ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಫೋಟೋ ಪ್ರತಿಗಳನ್ನು ಸ್ವದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಯಾವುದೇ ಕಾರಣಕ್ಕೂ ಮೂಲ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು.

1) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ : ವರ್ಗಾವಣೆ ಪ್ರಮಾಣ ಪತ್ರ : ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗ
3) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ 2ಎ, ಪ್ರವರ್ಗ 2ಬಿ ಪ್ರವರ್ಗ 3ಎ ಮತ್ತು ಪ್ರವರ್ಗ 3ಬಿ ಗಳ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ ಹಾಗೂ ವಯೋಮಿತಿ ಸಡಿಲಿಕೆ ಕೋರಿದ್ದಲ್ಲಿ)
4) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ – 1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
5) ಅಂಗವಿಕಲತೆಯ ಕುರಿತು ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
6) ಅಭ್ಯರ್ಥಿಯು ವಾಸವಾಗಿರುವ ಸ್ಥಳದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರ ಲಗತ್ತಿಸತಕ್ಕದ್ದು. ಅದು ಅರ್ಜಿ ಸ್ವೀಕರಿಸುವ ದಿನಾಂಕದಿಂದ 6 ತಿಂಗಳೊಳಗೆ ಪಡೆದಿದ್ದಿರಬೇಕು. ಅದಕ್ಕಿಂತಲೂ ಹಿಂದಿನದಾಗಿದ್ದರೆ ತಿರಸ್ಕರಿಸಲಾಗುವುದು.
7) ವಿದ್ಯಾರ್ಹತೆ ಜನ್ಮ ದಿನಾಂಕ, ಶಾಲಾ ಮುಖ್ಯಸ್ಥರಿಂದ ಪಡೆದ ನಡತೆ ಪ್ರಮಾಣ ಪತ್ರ, ಅಂಕಪಟ್ಟಿ ಸದರಿ (ಇವುಗಳ ಸ್ವದೃಢೀಕೃತ ಪ್ರತಿಗಳನ್ನು ಲಗತ್ತಿಸತಕ್ಕದ್ದು)
8) 5–00 ರೂಪಾಯಿ ಅಂಚೆ ಚೀಟಿಯನ್ನೊಳಗೊಂಡ ಸ್ವ ವಿಳಾಸಿತ ಲಕೋಟೆ
9) ಅರ್ಜಿಯ ಮೇಲೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಅಂಟಿಸತಕ್ಕದ್ದು ಹಾಗೂ ಅದರ ಮೇಲೆ ತಮ್ಮ ಸಹಿಯನ್ನು ಹಾಕತಕ್ಕದ್ದು.
10) ಅಭ್ಯರ್ಥಿಯು ಭಾರತೀಯ ನಾಗರೀಕನಲ್ಲದಿದ್ದಲ್ಲಿ ಜಿಲ್ಲಾಧಿಕಾರಿ/ಜಿಲ್ಲಾ ದಂಡಾಧಿಕಾರಿಯವರು ನೀಡಿರುವ ನಾಗರೀಕ ದೃಢೀಕರಣ ಪತ್ರ.
11) ಅಭ್ಯರ್ಥಿಗಳು ನಿವಾಸಿ ದೃಢೀಕರಣ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**7) ಪ್ರಮುಖವಾದ ಸೂಚನೆಗಳು:**

1) ಅರ್ಜಿಯನ್ನು ಈ ಅಧಿಸೂಚನೆಗೆ ಲಗತ್ತಿಸಿದ ನಮೂನೆಯಲ್ಲಿ ಪೂರ್ಣ ವಿವರಗಳೊಂದಿಗೆ ಸಲ್ಲಿಸತಕ್ಕದ್ದು. ಅಪೂರ್ಣ ವಿವರಗಳನ್ನೊಳಗೊಂಡ ಅರ್ಜಿಗಳನ್ನು ಪರಿಗಣಿಸುವುದಿಲ್ಲ.
2) ಜವಾನ ಹುದ್ದೆಗೆ ಸಂಬಂಧಿಸಿದಂತೆ 7ನೇ ತರಗತಿಯ ಅಂಕಪಟ್ಟಿಗಳನ್ನು ಪರಿಶೀಲನೆಗೆ ಒಳಪಡಿಸಲಾಗುವುದು. ಒಂದು ವೇಳೆ ಅವು ಅಥವಾ ಲಗತ್ತಿಸಿರುವ ಇನ್ನಿತರೆ ದಾಖಲೆಗಳು ಖೊಟ್ಟಿ ಎಂದು ಕಂಡು ಬಂದರೆ ಅಂಥವರ ವಿರುದ್ಧ ನಿಯಮಗಳ ರೀತ್ಯ ಕ್ರಮ ಕೈಗೊಳ್ಳಲಾಗುವುದು.
3) ಅವನ : ಅವಳ ಅಭ್ಯರ್ಥಿಕೆಗಾಗಿ ಅಧಿಕಾರಿಗಳಿಂದಾಗಲೀ ಅಥವಾ ಅಧಿಕಾರೇತರರಿಂದಾಗಲೀ ಯಾವುದೇ ರೀತಿಯಲ್ಲಿ ಬಾಹ್ಯ ಬೆಂಬಲವನ್ನು ಪಡೆಯಲು ಪ್ರಯತ್ನಿಸುವ ಯಾವುದೇ ವ್ಯಕ್ತಿಯು ರಾಜ್ಯ ಸೇವೆಯ ನೇಮಕಾತಿಗೆ ಅರ್ಹನಾಗಿರುವುದಿಲ್ಲ.
4) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯನ್ನು ತಮ್ಮ ಮೇಲಾಧಿಕಾರಿಗಳ ಮುಖಾಂತರ ಸಲ್ಲಿಸತಕ್ಕದ್ದು.
5) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮರುದಿನದಂದು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು. ಕೊನೆಯ ದಿನಾಂಕದ ನಂತರ ಈ ಕಛೇರಿಗೆ ಬರುವ ಯಾವುದೇ ಅರ್ಜಿಗಳನ್ನು ಹಾಗೂ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.
6) ಒಂದಕ್ಕಿಂತ ಹೆಚ್ಚು ಹುದ್ದೆಗೆ ಅರ್ಜಿ ಸಲ್ಲಿಸುವವರು ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.
7) ಅರ್ಜಿಯಲ್ಲಿ ಹಾಗೂ ಅರ್ಜಿಯನ್ನು ಒಳಗೊಂಡಿರುವ ಲಕೋಟೆಯ ಮೇಲೆ ಅರ್ಜಿ ಸಲ್ಲಿಸಲಾಗುತ್ತಿರುವ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
8) ಅಭ್ಯರ್ಥಿಗಳು ಅರ್ಜಿಯ ಮೇಲ್ಭಾಗದ ಬಲಗಡೆಯ ತುದಿಯಲ್ಲಿ ಕೋರಿರುವ ಮೀಸಲಾತಿಯನ್ನು ತಪ್ಪದೆ ನಮೂದಿಸತಕ್ಕದ್ದು.
9) ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಿದ್ದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.
10) ಅಭ್ಯರ್ಥಿಗಳಿಗೆ ಸಂದರ್ಶನದ ಬಗ್ಗೆ ಈ ಕಛೇರಿಯಿಂದ ಯಾವುದೇ ಮಾಹಿತಿಯು ಬಾರದೇ ಇದ್ದರೆ, ಅವರು ಸಂದರ್ಶನಕ್ಕೆ ಆಯ್ಕೆಯಾಗಿಲ್ಲ ಎಂದು ಭಾವಿಸತಕ್ಕದ್ದು ಮತ್ತು ಈ ರೀತಿ ತಿರಸ್ಕೃತ ಅರ್ಜಿಗಳ ಬಗ್ಗೆ ಅಥವಾ ಸಂದರ್ಶನಕ್ಕೆ ಅನರ್ಹರಾದ ಬಗ್ಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಆಸ್ಪದವಿರುವುದಿಲ್ಲ.

11) ಅಧಿಸೂಚನೆಯಲ್ಲಿ ನಮೂದಿಸಿರುವ ವರ್ಗೀಕರಣಕ್ಕನುಸಾರವಾಗಿ ಅರ್ಹ ಮಹಿಳೆ, ಗ್ರಾಮೀಣ ಅಭ್ಯರ್ಥಿಗಳಿಂದ ನಿಗದಿಪಡಿಸಿದಷ್ಟು ಅರ್ಜಿಗಳು ಬಾರದಿದ್ದಲ್ಲಿ ಅಥವಾ ಸೂಕ್ತ ಅಭ್ಯರ್ಥಿಯು ದೊರಕದಿದ್ದಲ್ಲಿ ಅದೇ ವರ್ಗದ ಪುರುಷ ಅಥವಾ ಇತರೇ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

12) ಅಭ್ಯರ್ಥಿಯು ಎಲ್ಲಾ ಪ್ರಮಾಣ ಪತ್ರಗಳು, ಅಂಕಪಟ್ಟಿಗಳು ಮುಂತಾದವುಗಳನ್ನು ಒಳಗೊಂಡ ಅರ್ಜಿಯನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರಿಗೆ **ದಿನಾಂಕ: 05.09.2009 ರ ಸಂಜೆ 5.00 ಗಂಟೆಯ** ಒಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಕಳುಹಿಸಬೇಕು. ನಿಗದಿಪಡಿಸಿದ ಕೊನೆಯ ದಿನಾಂಕದ ತರುವಾಯ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

13) ಅಭ್ಯರ್ಥಿಗಳು ಮೀಸಲಾತಿ ಕೋರಿ ಸಲ್ಲಿಸಿದ ನಿಗದಿತ ಪ್ರಮಾಣ ಪತ್ರ ಅಥವಾ ಇನ್ನಿತರ ಯಾವುದೇ ದಾಖಲಾತಿಗಳು ತಪಾಸಣಾ ಅವಧಿಯಲ್ಲಿ ಸುಳ್ಳೆಂದು ಕಂಡು ಬಂದರೆ ಅವರ ವಿರುದ್ಧ ಭಾರತೀಯ ದಂಡ ಸಂಹಿತೆ ಕಲಮುಗಳಡಿ ಶಿಕ್ಷೆಗೆ ಗುರಿಪಡಿಸಲಾಗುವುದು ಮತ್ತು ಅವರ ಆಯ್ಕೆಯನ್ನು ರದ್ದುಪಡಿಸಲಾಗುವುದು.

14) ಅಭ್ಯರ್ಥಿಗಳು ಆಯ್ಕೆಗೊಂಡರೆ, ದಾವಣಗೆರೆ ಜಿಲ್ಲೆಯ ಯಾವುದೇ ನ್ಯಾಯಾಲಯದಲ್ಲಿಯಾದರೂ ಕಾರ್ಯ ನಿರ್ವಹಿಸಲು ಸಿದ್ಧರಿರತಕ್ಕದ್ದು.

**ಬಸವರಾಜ ಎಸ್. ತಡಹಾಳ್**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ

**ಅರ್ಜಿ ನಮೂನೆ**

ಗೌರವಾನ್ವಿತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ದಾವಣಗೆರೆ ಜಿಲ್ಲೆ,
ದಾವಣಗೆರೆ – ಇವರಿಗೆ.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ನ್ಯಾಯಾಂಗ ಘಟಕದ ಅಧಿಸೂಚನೆ ಸಂಖ್ಯೆ: 1/2009, ದಿನಾಂಕ: 03/08/2009ರ ಮೇರೆಗೆ ವಿವಿಧ ಹುದ್ದೆಗಳಿಗೆ ಅರ್ಜಿಯನ್ನು ಸಲ್ಲಿಸಲು ಆಹ್ವಾನಿಸಿದ್ದುದರ ಮೇರೆಗೆ ನಾನು ------------ ಹುದ್ದೆಗೆ – ಮೀಸಲಾತಿ ವರ್ಗದಡಿ ಆಯ್ಕೆ ಬಯಸಿ ಈ ಕೆಳಗಿನ ವಿವರಗಳನ್ನೊಳಗೊಂಡ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

ಸ್ವದೃಢೀಕರಿಸಿದ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು

| | | | |
|---|---|---|---|
| 1 | ಅಭ್ಯರ್ಥಿಯ ಹೆಸರು (ಸ್ಪಷ್ಟವಾಗಿ ದಪ್ಪ ಅಕ್ಷರಗಳಲ್ಲಿ ಬರೆಯಬೇಕು) | : | |
| 2 | ಅಭ್ಯರ್ಥಿಯ ತಂದೆ : ತಾಯಿಯ : ಗಂಡನ : ಹೆಂಡತಿಯ : ಪೋಷಕರ ಹೆಸರು ಮತ್ತು ವೃತ್ತಿ | : | |
| 3 | ಅಭ್ಯರ್ಥಿಯ ಪೂರ್ಣ ವಿಳಾಸ | : | |
| 4 | ಅಭ್ಯರ್ಥಿಯು ಸ್ತ್ರೀಯರೇ ಅಥವಾ ಪುರುಷರೇ | : | |
| 5 | ಹುಟ್ಟಿದ ದಿನಾಂಕ ಮತ್ತು ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕಕ್ಕೆ ವಯಸ್ಸು (ಸೂಕ್ತ ದಾಖಲೆಯನ್ನು ಲಗತ್ತಿಸತಕ್ಕದ್ದು) | : | |
| 6 | ಅಭ್ಯರ್ಥಿಯ ರಾಷ್ಟ್ರೀಯತೆ ಮತ್ತು ಜಾತಿ | : | |

| | | | | | |
|---|---|---|---|---|---|
| 7 | ಅಭ್ಯರ್ಥಿಯು ಪ.ಜಾ. : ಪ್ರವರ್ಗ–1: 2ಎ : 2ಬಿ : 3ಎ : 3ಬಿ ಗೆ ಸೇರಿರುವಿರಾ? ಅಂಗವಿಕಲರೇ?, ವಿಧವೆಯೇ? (ಹಾಗಿದ್ದಲ್ಲಿ ಆ ಕುರಿತು ಸಕ್ಷಮ ಪ್ರಾಧಿಕಾರದಿಂದ ಪಡೆದ ನಕಲು ಪ್ರತಿಯನ್ನು ಲಗತ್ತಿಸತಕ್ಕದ್ದು) | | | | |
| 8 | ಅಭ್ಯರ್ಥಿಯು ಗ್ರಾಮೀಣ ಅಭ್ಯರ್ಥಿಯೇ? (ಹಾಗಿದ್ದಲ್ಲಿ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು) | | | | |
| 9 | ಶೈಕ್ಷಣಿಕ ವಿದ್ಯಾರ್ಹತೆ: | | ಉತ್ತೀರ್ಣರಾದ ವರ್ಷ ಮತ್ತು ತಿಂಗಳು | ಗರಿಷ್ಠ ಅಂಕಗಳು | ಪಡೆದ ಅಂಕಗಳು |
| | 1) 7ನೇ / 10ನೇ ತರಗತಿ | : | | | |
| | 2) ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ | : | | | |
| | 3) ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ | : | | | |
| | 4) ಕನ್ನಡ ಬೆರಳಚ್ಚು ಪ್ರೌಢದರ್ಜೆ | : | | | |
| | 5) ಆಂಗ್ಲ ಬೆರಳಚ್ಚು ಪ್ರೌಢದರ್ಜೆ | : | | | |
| | 6) ಕನ್ನಡ ಬೆರಳಚ್ಚು ಕಿರಿಯ ದರ್ಜೆ | : | | | |
| | 7) ಆಂಗ್ಲ ಬೆರಳಚ್ಚು ಕಿರಿಯ ದರ್ಜೆ | : | | | |
| 10 | ಇತರೆ ಹೆಚ್ಚುವರಿ ವಿದ್ಯಾರ್ಹತೆ | : | | | |
| 11 | ಪ್ರೊಸೆಸ್ ಸರ್ವರ್ ಹುದ್ದೆಗೆ ಅರ್ಜಿ ಸಲ್ಲಿಸುವವರಾಗಿದ್ದರೆ ನೀವು ಚಾಲನಾ ಪರವಾನಿಗೆ ಹೊಂದಿದ್ದೀರಾ? ಹೊಂದಿದ್ದರೆ, ವಾಹನ ಚಾಲನಾ ಪರವಾನಿಗೆ ಸಂಖ್ಯೆ (ಲಘು ಅಥವಾ ಭಾರೀ ನಿರ್ದಿಷ್ಟವಾಗಿ ನಮೂದಿಸತಕ್ಕದ್ದು) | : | | | |
| 12 | ವಿವಾಹಿತರೇ : ಅವಿವಾಹಿತರೇ ವಿವಾಹಿತರಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ಜೀವಂತ ಪತಿ : ಪತ್ನಿಯನ್ನು ಹೊಂದಿದ್ದೀರಾ? | : | | | |
| 13 | ಅಭ್ಯರ್ಥಿಗಳು ಯಾವುದೇ ಅಪರಾಧಗಳನ್ನು ಎದುರಿಸುತ್ತಿರುವಿರಾ ಅಥವಾ ನಿಮ್ಮ ವಿರುದ್ಧ ಯಾವುದೇ ಅಪರಾಧವನ್ನು ನೋಂದಾಯಿಸಿಕೊಳ್ಳಲಾಗಿದೆಯೇ? | : | | | |
| 14 | ಅಭ್ಯರ್ಥಿಗಳು ಯಾವುದಾದರೂ ಸರ್ಕಾರಿ ನೌಕರಿಯಲ್ಲಿದ್ದೀರಾ? | : | | | |
| 15 | ಲಗತ್ತಿಸಿರುವ ದಾಖಲಾತಿಗಳು | : | | | |

ಮೇಲ್ಕಂಡ ವಿವರಣೆಗಳು ಸತ್ಯವಾಗಿರುತ್ತವೆ ಹಾಗೂ ಸರಿಯಾಗಿರುತ್ತವೆ ಎಂದು ಪ್ರಮಾಣೀಕರಿಸುತ್ತೇನೆ. ಮೇಲ್ಕಂಡ ಮಾಹಿತಿಗಳು ಸುಳ್ಳು ಮಾಹಿತಿ ಎಂದು ತಿಳಿದು ಬಂದಲ್ಲಿ ಕಾನೂನು ರೀತ್ಯಾ ತೆಗೆದುಕೊಳ್ಳುವ ಕ್ರಮಕ್ಕೆ ಬದ್ಧನಾಗಿರುತ್ತೇನೆ.

ಸ್ಥಳ: ——————————————

ದಿನಾಂಕ: ಅಭ್ಯರ್ಥಿಯ ಸಹಿ

ಪಿ.ಆರ್. 659

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ, ಚಿಕ್ಕಮಗಳೂರು**

**ಅಧಿಸೂಚನೆ ಸಂಖ್ಯೆ: ADMN–02/2009, ದಿನಾಂಕ: 11ನೇ ಆಗಸ್ಟ್ 2009**

**ವಿಷಯ:** ಜಾರಿಕಾರ ಮತ್ತು ಜವಾನರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** 1. ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA-II 205/2004 ದಿನಾಂಕ: 17–06–2009

2. ಸರ್ಕಾರಿ ಅದೇಶ ಸಂಖ್ಯೆ: LAW 32 LCE 2008 ದಿನಾಂಕ: 23–04–2008

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 10–09–2009 ಸಂಜೆ 5–00 ಗಂಟೆ**

ಅರ್ಜಿ ಸಲ್ಲಿಸಬೇಕಾದ ವಿಳಾಸ:– ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**I. ಜಾರಿಕಾರರ ಹುದ್ದೆಗಳು: (Process Server):**

1. ಹುದ್ದೆಗಳ ಸಂಖ್ಯೆ: 01
2. ಹುದ್ದೆಯ ವರ್ಗೀಕರಣ: **ಪ್ರವರ್ಗ –1ರ ಮಹಿಳಾ ಅಭ್ಯರ್ಥಿಗೆ ಮಾತ್ರ (ಮೀಸಲು)**
3. ವೇತನ ಶ್ರೇಣಿ: 5200–100–6000–125–6500–150–7100–175–7800–200–8200. ಹಾಗೂ ಲಭ್ಯವಿರುವ ಇತರೆ ಭತ್ಯೆಗಳು.
4. **ಶೈಕ್ಷಣಿಕ ವಿದ್ಯಾರ್ಹತೆ:**

**ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.**

ಬಿ) ಡ್ರೈವಿಂಗ್ ಲೈಸೆನ್ಸ್ ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**II. ಜವಾನರ ಹುದ್ದೆಗಳು: (Peons)**

1. **ಹುದ್ದೆಗಳ ಸಂಖ್ಯೆ:** 04
2. **ವೇತನ ಶ್ರೇಣಿ:** 4800–100–6000–125–6500–150–7100–175–7275.
3. **ಹುದ್ದೆಗಳ ವರ್ಗೀಕರಣ:**
   - ಎ) ಪರಿಶಿಷ್ಟ ಜಾತಿ – ಕನ್ನಡ ಮಾಧ್ಯಮ ಅಭ್ಯರ್ಥಿ – 1
   - ಬಿ) ವರ್ಗ – 2A, ಇತರೆ – 1
   - ಸಿ) ಸಾಮಾನ್ಯ ವರ್ಗ – ಮಹಿಳಾ ಅಭ್ಯರ್ಥಿ – 1
   - ಡಿ) ಸಾಮಾನ್ಯ ವರ್ಗ – ಗ್ರಾಮೀಣ ಅಭ್ಯರ್ಥಿ – 1
4. **ಶೈಕ್ಷಣಿಕ ವಿದ್ಯಾರ್ಹತೆ:**

ಎ) ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ರುಜು ಇರುವ ಅಂಕಪಟ್ಟಿಯನ್ನೇ ಹಾಜರುಪಡಿಸತಕ್ಕದ್ದು ಹಾಗೂ ಅರ್ಜಿಜೊತೆಯಲ್ಲಿ ಕೂಡಾ ಅದೇ ಅಂಕಪಟ್ಟಿಯ ಜೆರಾಕ್ಸ್ ನಕಲನ್ನು ಹಾಜರುಪಡಿಸತಕ್ಕದ್ದು.

ಬಿ) ಕನ್ನಡ ಓದಲು, ಬರೆಯಲು ತಿಳಿದಿರಬೇಕು.

**ಅನುಸರಿಸಬೇಕಾದ ನಿಯಮಗಳು:**

1. ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರಹದಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.
2. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಹಾಗೂ ಒಂದೇ ಹುದ್ದೆಗೆ ವಿವಿಧ ಮೀಸಲಾತಿಯಡಿಯಲ್ಲಿ ಅರ್ಜಿ ಸಲ್ಲಿಸುವವರು ಪತ್ಯೇಕವಾಗಿ ಅರ್ಜಿಗಳನ್ನು ನಿಗದಿತ ಅರ್ಜಿ ನಮೂನೆಗಳಲ್ಲಿ ಖಡ್ಡಾಯವಾಗಿ ಯಾವ ವರ್ಗ / ಮೀಸಲಾತಿಯಡಿಯಲ್ಲಿ ಅರ್ಜಿ ಸಲ್ಲಿಸುತ್ತಿರುವಿರಿ ಎಂಬುದನ್ನು ನಮೂದಿಸಿ ಅರ್ಜಿಯನ್ನು ಸಲ್ಲಿಸತಕ್ಕದ್ದು.
3. ಅಭ್ಯರ್ಥಿಯ ಇತ್ತೀಚಿನ ಪಾಸ್ ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.
4. ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾದ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ. ಲಗತ್ತಿಸಿದ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.
5. ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ/ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
6. **ವಯೋಮಿತಿ:–**

ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

| | | |
|---|---|---|
| ಆ) ಗರಿಷ್ಟ ವಯೋಮಿತಿ: | ಸಾಮಾನ್ಯ ವರ್ಗ | : 35 ವರ್ಷಗಳು |
| | 2ಎ, 2ಬಿ, 3ಎ, 3ಬಿ | : 38 ವರ್ಷಗಳು |
| | ಪರಿಶಿಷ್ಟ ಜಾತಿ / ಪಂಗಡ | : 40 ವರ್ಷಗಳು |

ಇ) ಹುಟ್ಟಿದ ದಿನಾಂಕವನ್ನು ತೋರಿಸುವ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು

7. ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದಲ್ಲಿ ಹಾಜರು ಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳು:

ಅ) ಜಾತಿ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ತಹಶೀಲ್ದಾರರಿಂದ ಪಡೆದಿರುವ ಪ್ರಮಾಣ ಪತ್ರ.

ಆ) ಗ್ರಾಮೀಣ ಮೀಸಲಾತಿ (1 ರಿಂದ 7ನೇ ತರಗತಿವರೆಗೆ) ಪ್ರಮಾಣ ಪತ್ರ ನಮೂನೆ – 1 ಮತ್ತು 2 ರಲ್ಲಿ

ಇ) ಕನ್ನಡ ಮಾಧ್ಯಮದಲ್ಲಿ 1ರಿಂದ 7ನೇ ತರಗತಿವರೆಗೆ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.

**8. ಆಯ್ಕೆ ವಿಧಾನ:**

ಅ) ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳ) (ನೇಮಕಾತಿ)(ತಿದ್ದುಪಡಿ) ನಿಯಮ 2007ರ ಪ್ರಕಾರ ನಡೆಸಲಾಗುವುದು.

ಆ) ಯಾವುದೇ ವರ್ಗಗಳ ಮಹಿಳಾ, ಗ್ರಾಮೀಣ ಕನ್ನಡ ಮಾಧ್ಯಮ ಮೀಸಲಾತಿ ಇರುವ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ತುಂಬಿಕೊಳ್ಳಲಾಗುವುದು.

**9. ಅಭ್ಯರ್ಥಿಗಳಿಗೆ ಸೂಚನೆಗಳು:–**

ಅ) ಅಭ್ಯರ್ಥಿಗಳು ನೇಮಕಾತಿ ಸಂಬಂಧ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸುವುದಿಲ್ಲ.

ಆ) ಅಪೂರ್ಣವಾಗಿರುವ, ಸಹಿ ಇಲ್ಲದೇ ಇರುವ, ಖಡ್ಡಾಯವಾಗಿ ತುಂಬಬೇಕಾದ ಕಾಲಂಗಳನ್ನು ಭರ್ತಿ ಮಾಡದೇ ಇರುವ, ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಇ) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಚಿತ ಮಾರ್ಗದ ಮುಖಾಂತರ (Through proper Channel) ಸಲ್ಲಿಸಬೇಕು.

ಉ) ಅರ್ಜಿದಾರರು ಯಾವ ಹುದ್ದೆಗಳಿಗೆ ಹಾಗೂ ಯಾವ ವರ್ಗೀಕರಣಕ್ಕೆ ಸಂಬಂಧಿಸಿದಂತೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ನಮೂದಿಸಬೇಕು.

ಊ) ಜಾರಿಕಾರರ ಹುದ್ದೆಗೆ 1:25 ರ ಅನುಪಾತ ಹಾಗೂ ಜವಾನರ ಹುದ್ದೆಗಳಿಗೆ 1:10 ರ ಅನುಪಾತದಲ್ಲಿ, ನಿಗದಿಪಡಿಸಿರುವ ವಿದ್ಯಾರ್ಹತೆಗೆ ಅನುಗುಣವಾಗಿ, ಅತೀ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಯ್ಕೆ ಮಾಡಲಾಗುವುದು, ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

ಋ) ಅಭ್ಯರ್ಥಿಗಳಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ, ಸಂದರ್ಶನಕ್ಕೆ ಅನರ್ಹರೆಂದು ತಿಳಿಯುವುದು, ಅಲ್ಲದೇ ಮುಂದಿನ ಪತ್ರ ವ್ಯವಹಾರಕ್ಕಾಗಲೀ ದೂರವಾಣಿ ಮೂಲಕ ಮಾಹಿತಿ ಕೋರುವುದಕ್ಕಾಗಲೀ ಅವಕಾಶವಿರುವುದಿಲ್ಲ.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿಕ್ಕಮಗಳೂರು.

**ಅರ್ಜಿ ನಮೂನೆ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿಕ್ಕಮಗಳೂರು ಜಿಲ್ಲೆ,
ಚಿಕ್ಕಮಗಳೂರು – ಇವರಿಗೆ:

ಭಾವಚಿತ್ರ

ಮಾನ್ಯರೇ,

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆ: 02/2009 ದಿನಾಂಕ: 11–08–2009ರ ಪ್ರಕಾರ **ಜಾರಿಕಾರ/ಜವಾನ** ಹುದ್ದೆಗೆ ನಾನು ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸುತ್ತಿದ್ದೇನೆ.

| | | |
|---|---|---|
| 1. | ಅಭ್ಯರ್ಥಿಯ ಹೆಸರು | |
| 2. | ತಂದೆ / ತಾಯಿ / ಗಂಡನ ಹೆಸರು | |
| 3. | ಪೂರ್ಣ ವಿಳಾಸ | |

| | | | | | |
|---|---|---|---|---|---|
| 4. | ವಯಸ್ಸು ಮತ್ತು ಜನ್ಮ ದಿನಾಂಕ: | | | | |
| 5. | ಲಿಂಗ | ಪುರುಷ / ಮಹಿಳೆ | | | |
| 6. | ರಾಷ್ಟ್ರೀಯತೆ:<br>ಧರ್ಮ:<br>ಜಾತಿ / ಉಪಜಾತಿ | | | | |
| 7. | ಯಾವ ವರ್ಗ / ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೀರಿ? (ಸಂಬಂಧಪಟ್ಟ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು) | | | | |
| 8. | ಶೈಕ್ಷಣಿಕ ವಿದ್ಯಾರ್ಹತೆ (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ: | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾ ವಾರು ಅಂಕಗಳು |
| ಎ) | 10ನೇ ತರಗತಿ / 7ನೇ ತರಗತಿ ಉತ್ತೀರ್ಣ | | | | |

**ಸೂಚನೆ:–** ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಖಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ಸತ್ಯವಾಗಿದ್ದು ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ತಾವು ತೆಗೆದುಕೊಳ್ಳುವ ತೀರ್ಮಾನಗಳಿಗೆ ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡ ಪಕ್ಷದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿರುತ್ತೇನೆ / ಸಿದ್ಧಳಿರುತ್ತೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ.

ಪಿ.ಆರ್. 679

**ವಾರ್ತಾ ಇಲಾಖೆ**

**ನಂ.17, ವಾರ್ತಾ ಸೌಧ, ಭಗವಾನ್ ಮಹಾವೀರ ರಸ್ತೆ, ಬೆಂಗಳೂರು–560001**

**ಬ್ಯಾಕ್‌ಲಿಟ್ ಸ್ಕ್ರೋಲಿಂಗ್ ಪ್ರದರ್ಶನ ಫಲಕ ಯಂತ್ರಗಳನ್ನು ಪೂರೈಸಿ ಅಳವಡಿಸಲು ಟೆಂಡರ್ ಆಹ್ವಾನ**

**ಸಂ:ವಾಇ.ಕ್ಷೇ.ಪ್ರ/ಬ್ಯಾಲಿಡಿಸಿ/2009–10/8385–87, ದಿನಾಂಕ: 1/4ನೇ ಆಗಸ್ಟ್ 2009**

ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಜನತೆಗೆ ಮಾಹಿತಿ ನೀಡುವ ಸಲುವಾಗಿ 3x5 ಅಡಿ ಅಳತೆಯ ಹಾಗೂ ಕನಿಷ್ಟ 10 ಸ್ಲೈಡ್ಸ್‌ಗಳನ್ನೊಳಗೊಂಡ ಸ್ವಯಂಚಾಲಿತ ಬ್ಯಾಕ್‌ಲಿಟ್ ಸ್ಕ್ರೋಲಿಂಗ್ ಪ್ರದರ್ಶನ ಫಲಕ ಯಂತ್ರಗಳನ್ನು ಪೂರೈಸಲು ಟೆಂಡರ್ ಆಹ್ವಾನಿಸಲಾಗಿದೆ. ಖಾಲಿ ಟೆಂಡರ್ ನಮೂನೆಗಳನ್ನು ದಿನಾಂಕ:26.08.2009ರವರೆಗೆ ಅರ್ಜಿ ಶುಲ್ಕ ರೂ.500/–ಗಳನ್ನು ನಗದು ಅಥವಾ ಡಿಡಿ ರೂಪದಲ್ಲಿ ಸಲ್ಲಿಸಿ, ಪಡೆಯಬಹುದು. ಟೆಂಡರ್ ಸ್ವೀಕರಿಸುವ ಕೊನೆ ದಿನಾಂಕ: 3.9.2009ರ ಮಧ್ಯಾಹ್ನ 1.00 ಗಂಟೆ. ಟೆಂಡರ್‌ಗಳನ್ನು ಅದೇ ದಿನ ಸಂಜೆ 4.00 ಗಂಟೆಗೆ ತೆರೆಯಲಾಗುವುದು. ಟೆಂಡರ್‌ದಾರರು ಟೆಂಡರ್‌ನೊಂದಿಗೆ ಭದ್ರತಾ ಠೇವಣಿ ರೂ.65,000/–ಗಳ ಮೊತ್ತದ ಡಿಡಿಯನ್ನು ಆಯುಕ್ತರು, ವಾರ್ತಾ ಇಲಾಖೆ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದು ಸಲ್ಲಿಸತಕ್ಕದ್ದು. ಹೆಚ್ಚಿನ ವಿವರಗಳನ್ನು ಕಚೇರಿ ವೇಳೆಯಲ್ಲಿ ಉಪನಿರ್ದೇಶಕರು (ಕ್ಷೇ.ಪ್ರ) ವಾರ್ತಾ ಇಲಾಖೆ, ಬೆಂಗಳೂರು ಇವರಿಂದ ಪಡೆಯಬಹುದಾಗಿದೆ.

**ವಿವರಗಳು:**

1. ಸರ್ಕಾರದ ಅಭಿವೃದ್ಧಿಪರ ಕಾರ್ಯಕ್ರಮಗಳ ಮಾಹಿತಿ ಹೊಂದಿದ ವರ್ಣಯುತ 10 ಸ್ಲೈಡ್ಸ್‌ಗಳ 3x5 ಅಡಿ ಅಳತೆಯ ಸ್ವಯಂಚಾಲಿತ ಬ್ಯಾಕ್‌ಲಿಟ್ ಸ್ಕ್ರೋಲಿಂಗ್ ಪ್ರದರ್ಶನ ಫಲಕಯಂತ್ರ (ಮಲ್ಟಿ ಸ್ಕ್ರೋಲಿಂಗ್ ಡಿಸ್‌ಪ್ಲೇ ಸಿಸ್ಟಂ) ಗಳನ್ನು ಒದಗಿಸಿ, ತದನಂತರ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಪಂಚಾಯತ್ ಕಚೇರಿ ಹಾಗೂ ಜಿಲ್ಲಾ ಕೇಂದ್ರಗಳ ಬಸ್ ನಿಲ್ದಾಣಗಳಲ್ಲಿ ಸ್ಥಾಪಿಸಿ ಕೊಡುವುದು.

2. ಬ್ಯಾಕ್‌ಲಿಟ್ ಸ್ವಯಂ ಚಾಲಿತ ಪ್ರದರ್ಶನ ಫಲಕ ಯಂತ್ರಗಳು ಈ ಕೆಳಕಂಡ ಲಕ್ಷಣಗಳನ್ನು ಹೊಂದಿರಬೇಕು.
   - ➢ ಹವಾಮಾನ ಪ್ರತಿರೋಧ ಗುಣ ಹೊಂದಿರಬೇಕು.
   - ➢ ಒಳಾಂಗಣ ಅಥವಾ ಹೊರಾಂಗಣದಲ್ಲಿ ಸ್ಥಾಪಿಸುವಂತಿರಬೇಕು.
   - ➢ ಯಂತ್ರದ ಮುಂಭಾಗವು ಹೈಡ್ರಾಲಿಕ್ ಆಲ್ಯೂಮಿನಿಯಂ ಕೇಸಿಂಗ್ ಹೊಂದಿರಬೇಕು.
   - ➢ ಸ್ವಯಂ ಚಾಲಿತ ಸ್ಕ್ರೋಲಿಂಗ್ ಹೊಂದಿರಬೇಕು.
   - ➢ ಪ್ರತಿಚಿತ್ರ ಒಂದು ಸೆಕೆಂಡ್ ಅವಧಿಯಿಂದ 99 ಸೆಕೆಂಡ್ ಅವಧಿಯವರೆಗೆ ನಿಲ್ಲುವಂತಿರಬೇಕು.
   - ➢ ಬೆಳಕು ಹಾಗೂ ಮೋಟಾರ್‌ನ್ನು ನಂದಿಸುವ ಮತ್ತು ಹಚ್ಚುವ ವ್ಯವಸ್ಥೆ ಇರಬೇಕು.
   - ➢ ಯಂತ್ರದ ಕವಚವು ಪೌಡರ್ ಲೇಪಿತ ಹಾಗೂ 18 ಎಸ್‌ಡಬ್ಲ್ಯೂಜಿ ಶೀಟ್‌ನಲ್ಲಿ ತಯಾರಿಸಿರಬೇಕು.
   - ➢ ಸದರಿ ಯಂತ್ರದಲ್ಲಿ 2 ಸಂಖ್ಯೆ ಸಿಂಕ್ರೋನಸ್ ಎ.ಸಿ. ಗೇರ್ ಮೋಟಾರ್‌ಗಳಿರಬೇಕು.
   - ➢ ಸದರಿ ಯಂತ್ರದಲ್ಲಿ 2 ಸಂಖ್ಯೆಯ ಎಲೆಕ್ಟ್ರಾನಿಕ್ಸ್ ಫಿಲಿಪ್ಸ್ ಚೋಕ್ ಅಂಡ್ ಟ್ಯೂಬ್ಸ್ ಇರಬೇಕು.
   - ➢ ಕನಿಷ್ಠ 10 ಪ್ರದರ್ಶನ ಫಲಕಗಳನ್ನು ಪ್ರದರ್ಶಿಸುವ ವ್ಯವಸ್ಥೆ ಹೊಂದಿರಬೇಕು.
   - ➢ ಯಂತ್ರವು ಒಂದು ಸೆನ್ಸಾರ್ (Sensor) ಒಳಗೊಂಡಿರಬೇಕು.
   - ➢ ಯಂತ್ರವು ಪಡೆಸ್ಟ್ರಿಯನ್ ಹಾಗೂ ಹಾರಿಜಾಂಟಲ್ ಮಾದರಿಯದ್ದಾಗಿರಬೇಕು.

**ಷರತ್ತುಗಳು:**

1. ಬ್ಯಾಕ್‌ಲಿಟ್ ಮೂವಿಂಗ್ ಪ್ರದರ್ಶನ ಯಂತ್ರಗಳನ್ನು ಮೇಲ್ಕಂಡಂತೆ ಸಿದ್ಧಪಡಿಸಿ, ಇಲಾಖೆಗೆ ಪೂರೈಸಬೇಕು. ತದನಂತರ ಇಲಾಖೆ ತಿಳಿಸುವ ಸ್ಥಳಗಳಿಗೆ ತೆರಳಿ ಅಳವಡಿಸಿಕೊಡಬೇಕು. ಅದರಂತೆ ಪ್ರತಿ ಬ್ಯಾಕ್‌ಲಿಟ್ ಮೂವಿಂಗ್ ಪ್ರದರ್ಶನ ಫಲಕವೊಂದಕ್ಕೆ ಟೆಂಡರ್ ದರ ನೀಡಬೇಕು.
2. ಟೆಂಡರ್‌ದಾರರು ಕಳೆದ 2007–08 ಮತ್ತು 2008–09ರ ಸಾಲಿನಲ್ಲಿ ಯಾವುದಾದರೂ ಒಂದು ವರ್ಷದಲ್ಲಿ ರೂ. 15.00 ಲಕ್ಷಗಳ ವೆಚ್ಚದಲ್ಲಿ ಯಾವುದಾದರೂ ಸರ್ಕಾರಿ ಇಲಾಖೆಗೆ ಇಂತಹುದೇ ಮಾದರಿ ಯಂತ್ರಗಳನ್ನು ಪೂರೈಸಿದ ಒಂದು ಕಾಮಗಾರಿಯ ಅನುಭವ ಪ್ರಮಾಣ ಪತ್ರವನ್ನು ಟೆಂಡರ್‌ನೊಂದಿಗೆ ಸಲ್ಲಿಸಬೇಕು.
3. ಇಎಂಡಿ ರೂ.65,000/–ಗಳನ್ನು ಆಯುಕ್ತರು, ವಾರ್ತಾ ಇಲಾಖೆ, ಬೆಂಗಳೂರು ಇವರ ಹೆಸರಿಗೆ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್‌ನೊಂದಿಗೆ ಸಲ್ಲಿಸಬೇಕು.
4. ಟೆಂಡರ್‌ನೊಂದಿಗೆ ಟೆಂಡರ್‌ದಾರರು ತಮ್ಮ ಸಂಸ್ಥೆಗೆ ಸಂಬಂಧಿಸಿದ 2008–09ನೇ ಸಾಲಿನ ಮಾರಾಟ ತೆರಿಗೆ ಸಲ್ಲಿಕೆ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.
5. ಟೆಂಡರ್‌ನೊಂದಿಗೆ ಟೆಂಡರ್‌ದಾರರು ತಮ್ಮ ಸಂಸ್ಥೆಗೆ ಸಂಬಂಧಿಸಿದ 2008–09ನೇ ಸಾಲಿನ ಆದಾಯ ತೆರಿಗೆ ಸಲ್ಲಿಕೆ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.
6. ಟೆಂಡರ್‌ನೊಂದಿಗೆ ಸಲ್ಲಿಸುವ ಎಲ್ಲಾ ದಾಖಲೆಗಳು ಟೆಂಡರ್ ಸಲ್ಲಿಸುವ ಆಯಾ ಸಂಸ್ಥೆಯ ಹೆಸರಿನಲ್ಲೇ ಇರಬೇಕು.
7. ಸಂಸ್ಥೆಯು ರಾಜ್ಯ ಸರ್ಕಾರದ ಸಣ್ಣ ಪ್ರಮಾಣ ಕೈಗಾರಿಕಾ ಸಂಸ್ಥೆಯಲ್ಲಿ ನೊಂದಾಯಿಸಿರಬೇಕು.
8. ಇಲಾಖೆ ನೀಡುವ ನಿಗದಿತ ಟೆಂಡರ್ ನಮೂನೆಯಲ್ಲಿಯೇ ಟೆಂಡರ್‌ನ್ನು ಸಲ್ಲಿಸಬೇಕು.
9. ರಾಷ್ಟ್ರೀಕೃತ ಬ್ಯಾಂಕಿನಿಂದ ರೂ. 30.00 ಲಕ್ಷಗಳಿಗೆ ಸಾಲ್ವೆನ್ಸಿ ಪತ್ರ ಪಡೆದು ಟೆಂಡರ್‌ನೊಂದಿಗೆ ಸಲ್ಲಿಸಬೇಕು.
10. ಟೆಂಡರ್ ಸಲ್ಲಿಸುವ ಲಕೋಟೆ ಮೇಲೆ "ಬ್ಯಾಕ್‌ಲಿಟ್ ಪ್ರದರ್ಶನ ಯಂತ್ರ ಒದಗಿಸಲು ಟೆಂಡರ್" ಎಂದು ನಮೂದಿಸಿರಬೇಕು.
11. ಕಾರ್ಯಾದೇಶ ನೀಡಿದ ದಿನಾಂಕದಿಂದ 20 ದಿನಗಳೊಳಗೆ ಈ ಕಾರ್ಯವನ್ನು ಪೂರ್ಣಗೊಳಿಸಿ ಕೊಡಬೇಕು.
12. ಟೆಂಡರ್‌ನ್ನು ಆಯುಕ್ತರು, ನಂ.17, ವಾರ್ತಾ ಸೌಧ, ಭಗವಾನ್ ಮಹಾವೀರ ರಸ್ತೆ, ಬೆಂಗಳೂರು–560 001, ಇವರಿಗೆ ದಿನಾಂಕ: 3.9.2009ರಂದು ಮಧ್ಯಾಹ್ನ 1.00 ಗಂಟೆಯೊಳಗೆ ಸಲ್ಲಿಸಬೇಕು.
13. ಟೆಂಡರ್‌ನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಇಲಾಖಾ ಮುಖ್ಯಸ್ಥರಿಗೆ ಇರುತ್ತದೆ. ಅಲ್ಲದೆ ಯಾವುದೇ ಮುನ್ಸೂಚನೆ ನೀಡದೆ ಟೆಂಡರ್‌ನ್ನು ರದ್ದು ಪಡಿಸುವ ಅಥವಾ ಮುಂದೂಡುವ ಅಧಿಕಾರ ಇಲಾಖಾ ಆಯುಕ್ತರಿಗೆ ಇರುತ್ತದೆ.

**ಎನ್.ಆರ್. ವಿಶುಕುಮಾರ್**

ಪಿ.ಆರ್. 682 ನಿರ್ದೇಶಕರು, ವಾರ್ತಾ ಇಲಾಖೆ.

**ವಾರ್ತಾ ಇಲಾಖೆ**

**ನಂ.17, ವಾರ್ತಾ ಸೌಧ, ಭಗವಾನ್ ಮಹಾವೀರ ರಸ್ತೆ, ಬೆಂಗಳೂರು–560001**

**ಮೈಸೂರು ದಸರಾ ವಿಜಯದಶಮಿ ಮೆರವಣಿಗೆಗಾಗಿ ಸ್ತಬ್ಧಚಿತ್ರ ನಿರ್ಮಿಸಿಕೊಡಲು ಟೆಂಡರ್**

**ಸಂ:ವಾಇ/ಕ್ಷೇ.ಪ್ರ/ಮೈದಸ್ತಚಿ/2009–10/8809–11, ದಿನಾಂಕ: 7/11ನೇ ಆಗಸ್ಟ್ 2009**

ಮೈಸೂರು ದಸರಾ ವಿಜಯದಶಮಿ ಮೆರವಣಿಗೆಯಲ್ಲಿ ವಾರ್ತ ಇಲಾಖೆ ಸ್ತಬ್ಧಚಿತ್ರದೊಂದಿಗೆ ಪಾಲ್ಗೊಳ್ಳುವ ಸಂಬಂಧ **"ಮನುಷ್ಯ ಜಾತಿ ತಾನೊಂದೇ ವಲಂ"** ಎಂಬ ವಿಷಯಾಧಾರಿತ ಸ್ತಬ್ಧಚಿತ್ರವನ್ನು ನಿರ್ಮಿಸಿಕೊಡಲು ಆಸಕ್ತರಿಂದ ಟೆಂಡರ್ ಆಹ್ವಾನಿಸಲಾಗಿದೆ. ಖಾಲಿ ಟೆಂಡರ್ ನಮೂನೆಗಳನ್ನು ದಿನಾಂಕ:3.9.2009ರವರೆಗೆ ಅರ್ಜಿಯನ್ನು ಶುಲ್ಕ ರೂ.400/–ಗಳನ್ನು ನಗದು ಅಥವಾ ಡಿಡಿ ರೂಪದಲ್ಲಿ ಸಲ್ಲಿಸಿ, ಕಚೇರಿ ವೇಳೆಯಲ್ಲಿ ಪಡೆಯಬಹುದು. ಟೆಂಡರ್ ಸ್ವೀಕರಿಸಲು ಕೊನೆಯ ದಿನಾಂಕ:8.9.2009ರ ಮಧ್ಯಾಹ್ನ 1.00 ಗಂಟೆ. ಟೆಂಡರ್‌ನ್ನು ಅದೇ ದಿನ ಸಂಜೆ 4.00 ಗಂಟೆಗೆ ತೆರೆಯಲಾಗುವುದು. ಇಎಂಡಿ ರೂ.10,000/– ಗಳನ್ನು ಆಯುಕ್ತರು, ವಾರ್ತಾ ಇಲಾಖೆ, ಬೆಂಗಳೂರು ಇವರ ಹೆಸರಿಗೆ ರಾಷ್ಟ್ರೀಕೃತ ಬ್ಯಾಂಕಿನಿಂದ ಡಿಡಿ ರೂಪದಲ್ಲಿ ಪಡೆದು ಟೆಂಡರ್‌ನೊಂದಿಗೆ ಸಲ್ಲಿಸಬೇಕು. ಹೆಚ್ಚಿನ ವಿವರಗಳನ್ನು ಕಚೇರಿ ವೇಳೆಯಲ್ಲಿ ಉಪನಿರ್ದೇಶಕರು (ಕ್ಷೇ.ಪ್ರ) ವಾರ್ತಾ ಇಲಾಖೆ, ಬೆಂಗಳೂರು ಇವರಿಂದ ಪಡೆಯಬಹುದಾಗಿದೆ.

**ಸ್ತಬ್ಧ ಚಿತ್ರ ನಿರ್ಮಾಣ ಕಾರ್ಯದ ವಿವರಗಳು:–**

1. 35x14x10 ಅಡಿ ಅಳತೆಯ ಟ್ರೇಲರ್ ಲಾರಿಯನ್ನು ಬಳಸಿ ಅದರ ಮೇಲ್ಭಾಗದಲ್ಲಿ ಸುತ್ತಲೂ ಸರ್ವೆ ಮರಗಳನ್ನು ಉಪಯೋಗಿಸಿ, ಸ್ತಬ್ಧಚಿತ್ರ ರಚನೆಗೆ ಸೂಕ್ತ ಸಿದ್ಧತೆ ಮಾಡಿಕೊಂಡು ನಂತರ ಸಿಲ್ವರ್ ಮರದ ರೀಪರ್‌ಗಳನ್ನು ಉಪಯೋಗಿಸಿ, ಸ್ತಬ್ಧಚಿತ್ರದ ಫ್ರೇಮುಗಳನ್ನು ಲಾರಿಯ ಮುಂಭಾಗ ಒಳಗೊಂಡಂತೆ ನಾಲ್ಕು ಭಾಗಗಳಿಗೂ ಹೊಂದುವಂತೆ ಅಳವಡಿಸಿ, ಅವುಗಳ ಮೇಲೆ ನಾಲ್ಕು ಎಂ ಎಂ ಪ್ಲೇವುಡ್ ಶೀಟ್‌ನ್ನು ಹಾಕಿ ತದನಂತರ ಇಲಾಖೆ ನೀಡುವ **"ಮನುಷ್ಯ ಜಾತಿ ತಾನೊಂದೇ ವಲಂ"** ಕುರಿತ ವಿನ್ಯಾಸಕ್ಕನುಗುಣವಾಗಿ ಧ್ವನಿ–ಮುದ್ರಣ, ಕಲಾವಿದರ ವೇಷಭೂಷಣಗಳನ್ನು ಅಳವಡಿಸಬೇಕು. ಅಲ್ಲದೆ ಪ್ಲಾಸ್ಟರ್ ಆಫ್ ಪ್ಯಾರೀಸ್, ಫೈಬರ್, ಆಕರ್ಷಕ ವಿನ್ಯಾಸ ಪೂರ್ವಕವಾದ ಪ್ರಾತ್ಯಕ್ಷಿತೆಯನ್ನು ರೂಪುಗೊಳಿಸಬೇಕು. ಟ್ರೇಲರ್ ಸುತ್ತಲೂ ಫ್ರೇಂ ಬೋರ್ಡ್‌ನಲ್ಲಿ ಪ್ರಚಾರ ಸಾಹಿತ್ಯವನ್ನು ರೂಪುಗೊಳಿಸಬೇಕು. **"ಮನುಷ್ಯ ಜಾತಿ ತಾನೊಂದೇ ವಲಂ"** ಸ್ತಬ್ಧಚಿತ್ರಕ್ಕೆ ಹೊಂದುವಂತಹ ಸಂಗೀತ ವ್ಯವಸ್ಥೆಗೆ ಧ್ವನಿಮುದ್ರಣ ಹಾಗೂ ಧ್ವನಿವರ್ಧಕ ಸೌಲಭ್ಯ ಅಳವಡಿಸಿಕೊಡಬೇಕು. ಮತ್ತು 20 ಜನ ರೂಪದರ್ಶಿ ಕಲಾವಿದರು ಸ್ತಬ್ಧಚಿತ್ರದಲ್ಲಿ ಪಾಲ್ಗೊಳ್ಳುವಂತೆ ವ್ಯವಸ್ಥೆ ಮಾಡಬೇಕು. ಈ ಎಲ್ಲಾ ಕಾರ್ಯಗಳನ್ನು ನಿರ್ವಹಿಸುವುದರ ಮೂಲಕ ಒಟ್ಟಾರೆ ಒಂದು ಸ್ತಬ್ಧಚಿತ್ರ ನಿರ್ಮಿಸಿ ಕೊಡುವುದು.
2. ಈ ರೀತಿ ಸಿದ್ಧಪಡಿಸಿದ ಸ್ತಬ್ಧಚಿತ್ರವು ವಿಜಯದಶಮಿ ಮೆರವಣಿಗೆಯಲ್ಲಿ ಸಾಗುವಾಗ ಇಬ್ಬರು ಬಡಗಿಗಳು ಇದರ ಜೊತೆಗೆ ಸಾಗಲು ವ್ಯವಸ್ಥೆ ಮಾಡಬೇಕು.
3. ಸ್ತಬ್ಧಚಿತ್ರ ನಿರ್ಮಾಣ ಸಂಬಂಧ ಸಾಮಗ್ರಿ ವೆಚ್ಚ ಹಾಗೂ ಮಜೂರಿ ಸೇರಿದಂತೆ ದರವನ್ನು ಟೆಂಡರ್‌ನಲ್ಲಿ ನಮೂದಿಸಿ ಸಲ್ಲಿಸಬೇಕು.
4. ಸ್ತಬ್ಧಚಿತ್ರವನ್ನು ದಿನಾಂಕ: 26.9.2009ರ ಸಂಜೆ 5.00 ಗಂಟೆಯೊಳಗೆ ಸಿದ್ಧಪಡಿಸಿ, ಇಲಾಖೆಯ ಸುಪರ್ದಿಗೆ ನೀಡಬೇಕು.
5. ಟ್ರೇಲರ್ ಬಾಡಿಗೆ ಹಾಗೂ ಟ್ರೇಲರ್ ವಾಹನದ ಇಂಧನ ವೆಚ್ಚವನ್ನು ಟೆಂಡರ್‌ದಾರರೇ ಭರಿಸಬೇಕು.

**ಷರತ್ತುಗಳು:**

1. ಟೆಂಡರ್‌ದಾರರು ತಮ್ಮ ಸಂಸ್ಥೆಯ ಹೆಸರಿನಲ್ಲಿ ಸಣ್ಣ ಪ್ರಮಾಣ ಕೈಗಾರಿಕಾ ಘಟಕದಲ್ಲಿ ನೊಂದಾಯಿಸಿರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸಬೇಕು.
2. ಇಎಂಡಿ ರೂ.10,000/–ಗಳನ್ನು ಆಯುಕ್ತರು, ವಾರ್ತಾ ಇಲಾಖೆ, ಬೆಂಗಳೂರು ಇವರ ಹೆಸರಿಗೆ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್‌ನೊಂದಿಗೆ ಸಲ್ಲಿಸಬೇಕು.
3. ಟೆಂಡರ್‌ನೊಂದಿಗೆ ಟೆಂಡರ್‌ದಾರರು 2008–09ನೇ ಸಾಲಿನ ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಸಲ್ಲಿಕೆ ಪ್ರಮಾಣ ಪತ್ರದ ಪ್ರತಿಯನ್ನು ಲಗತ್ತಿಸಬೇಕು.
4. ರಾಷ್ಟ್ರಮಟ್ಟದಲ್ಲಿ ಅಥವಾ ರಾಜ್ಯಮಟ್ಟದಲ್ಲಿ ರೂ. 3.00 ಲಕ್ಷಗಳಿಗಿಂತ ಮೇಲ್ಪಟ್ಟ ಸ್ತಬ್ಧಚಿತ್ರ ನಿರ್ಮಿಸಿರುವ ಅನುಭವದ ತೃಪ್ತಿಕರ ಪತ್ರವನ್ನು ಟೆಂಡರ್‌ನೊಂದಿಗೆ ಲಗತ್ತಿಸಬೇಕು.
5. ರಾಷ್ಟ್ರೀಕೃತ ಬ್ಯಾಂಕಿನಿಂದ ರೂ. 3.00 ಲಕ್ಷಗಳಿಗೆ ಸಾಲ್ವೆನ್ಸಿ ಪತ್ರ ಪಡೆದು ಟೆಂಡರ್‌ನೊಂದಿಗೆ ಸಲ್ಲಿಸಬೇಕು.

6. ಟೆಂಡರ್ ತೆರೆಯುವ ಸಂದರ್ಭದಲ್ಲಿ ಟೆಂಡರ್‌ದಾರರಾಗಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಪ್ರತಿನಿಧಿ ಇರಬಹುದು.
7. ಎಲ್ಲಾ ದಾಖಲೆಗಳು ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕೃತಗೊಂಡಿರಬೇಕು.
8. ಟೆಂಡರ್ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಇಲಾಖಾ ಮುಖ್ಯಸ್ಥರಿಗೆ ಇರುತ್ತದೆ.
9. ಖಾಲಿ ಅರ್ಜಿ ಶುಲ್ಕ ರೂ. 400/–ಗಳನ್ನು ನಗದು ಅಥವಾ ಡಿಡಿ ರೂಪದಲ್ಲಿ ಸಲ್ಲಿಸಬೇಕು.

**ಎನ್.ಆರ್. ವಿಶುಕುಮಾರ್**

ಪಿ.ಆರ್. 683 ನಿರ್ದೇಶಕರು, ವಾರ್ತಾ ಇಲಾಖೆ.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಮಂಗಳೂರು ವಿಭಾಗ, ಮಂಗಳೂರು
### ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆ:ಲೋಇ:ಮಂವಿ:ಟಿ.ಎನ್‌ಡಿ(23):2009–10:ಎಇ–1, ಮಂಗಳೂರು, ದಿನಾಂಕ: 12ನೇ ಆಗಸ್ಟ್ 2009**

ಈ ಕೆಳಕಂಡ ಕೆಲಸಕ್ಕೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 31.08.2009ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 25.08.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. ಬಿಡ್ ಡಾಕ್ಯುಮೆಂಟ್ Section 3 ರಲ್ಲಿ ಕೇಳಿರುವ Qualification Information ನ್ನು ನಿಗದಿತ ನಮೂನೆಯಲ್ಲಿ ಅರ್ಜಿದಾರರು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 28.08.2009ರಂದು ಸಂಜೆ 5–30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಕಾಮಗಾರಿ ಅವಧಿ (ಮಳೆಗಾಲ ಹೊರತು ಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ ತೆರಿಗೆ ಸೇರಿ (ರೂ.ಗಳಲ್ಲಿ) |
|---|---|---|---|---|---|---|---|
| **I** | **ನಬಾರ್ಡ್ ಆರ್.ಐ.ಡಿ.ಎಫ್–14** | | | | | | |
| 1 | ಬೆಳ್ತಂಗಡಿ ತಾಲ್ಲೂಕಿನ ಗೇರುಕಟ್ಟೆ ಎಂಬಲ್ಲಿ ಪದವಿ ಪೂರ್ವ ಕಾಲೇಜಿಗೆ 3 ಹೆಚ್ಚುವರಿ ಕೊಠಡಿ ನಿರ್ಮಾಣ ಕಾಮಗಾರಿ | 23.00 | ಎರಡನೇ ದರ್ಜೆ ಮತ್ತು ಮೇಲ್ಪಟ್ಟು | 50,000.00 | 6 ತಿಂಗಳು | K/W-2 | 2750.00 |
| 2 | ಬೆಳ್ತಂಗಡಿ ತಾಲ್ಲೂಕಿನ ಹತ್ಯಡ್ಕ–ಅರಸಿನಮಕ್ಕಿ ಪದವಿ ಪೂರ್ವ ಕಾಲೇಜಿಗೆ 2 ಹೆಚ್ಚುವರಿ ಕೊಠಡಿ ನಿರ್ಮಾಣ ಕಾಮಗಾರಿ | 15.00 | ಎರಡನೇ ದರ್ಜೆ ಮತ್ತು ಮೇಲ್ಪಟ್ಟು | 30,000.00 | 6 ತಿಂಗಳು | K/W-1 | 2750.00 |
| 3 | ಬೆಳ್ತಂಗಡಿ ತಾಲ್ಲೂಕಿನ ಕೊಯ್ಯೂರು ಪದವಿ ಪೂರ್ವ ಕಾಲೇಜಿಗೆ 2 ಹೆಚ್ಚುವರಿ ಕೊಠಡಿ ನಿರ್ಮಾಣ ಕಾಮಗಾರಿ | 15.00 | ಎರಡನೇ ದರ್ಜೆ ಮತ್ತು ಮೇಲ್ಪಟ್ಟು | 30,000.00 | 6 ತಿಂಗಳು | K/W-1 | 2750.00 |
| 4 | ಮಂಗಳೂರು ತಾಲ್ಲೂಕಿನ ಮುತ್ತೂರು ಪದವಿ ಪೂರ್ವ ಕಾಲೇಜಿಗೆ 2 ಹೆಚ್ಚುವರಿ ಕೊಠಡಿ ನಿರ್ಮಾಣ ಕಾಮಗಾರಿ | 15.00 | ಎರಡನೇ ದರ್ಜೆ ಮತ್ತು ಮೇಲ್ಪಟ್ಟು | 30,000.00 | 6 ತಿಂಗಳು | K/W-1 | 2750.00 |
| 5 | ಬಂಟ್ವಾಳ ತಾಲ್ಲೂಕಿನ ಮೊಂಟೆ ಪದವು ಪದವಿ ಪೂರ್ವ ಕಾಲೇಜಿಗೆ 2 ಹೆಚ್ಚುವರಿ ಕೊಠಡಿ ನಿರ್ಮಾಣ ಕಾಮಗಾರಿ | 15.00 | ಎರಡನೇ ದರ್ಜೆ ಮತ್ತು ಮೇಲ್ಪಟ್ಟು | 30,000.00 | 6 ತಿಂಗಳು | K/W-1 | 2750.00 |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಕಾಮಗಾರಿ ಅವಧಿ (ಮಳೆಗಾಲ ಹೊರತು ಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ ತೆರಿಗೆ ಸೇರಿ (ರೂ.ಗಳಲ್ಲಿ) |
|---|---|---|---|---|---|---|---|
| 6 | ಬಂಟ್ವಾಳ ತಾಲ್ಲೂಕಿನ ಬಂಟ್ವಾಳ ಪದವಿ ಪೂರ್ವ ಕಾಲೇಜಿಗೆ 2 ಹೆಚ್ಚುವರಿ ಕೊಠಡಿ ನಿರ್ಮಾಣ ಕಾಮಗಾರಿ | 15.00 | ಎರಡನೇ ದರ್ಜೆ ಮತ್ತು ಮೇಲ್ಪಟ್ಟು | 30,000.00 | 6 ತಿಂಗಳು | K/W-1 | 2750.00 |

**ಸೂಚನೆಗಳು:–**

1. ಉದ್ದೇಶಿಸಿರುವ ಕಾಮಗಾರಿಯ ಶೇ. 50ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತು ಪ್ರಮಾಣ ಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್ / ಕಾಲ್‌ಡೆಪೋಸಿಟ್, ಡಿ.ಡಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್‌ಎಸ್‌ಸಿಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
4. ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5. ಕಾಮಗಾರಿಗೆ ಬೇಕಾದ ಸಿಮೆಂಟ್, ಡಾಂಬರು, ಜಲ್ಲಿ ಉಕ್ಕು ಮತ್ತು ಇನ್ನಿತರ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
6. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್‌ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.
7. ಕೆಲಸದ ಕುರಿತಾದ ಯಾವುದೇ ವಿವರಗಳನ್ನು ಕಛೇರಿ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಪಿ.ಆರ್. 673 ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯಪಾಲಕ ಅಭಿಯಂತರರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**

**ನಂ.ಇಎನ್‌ಹೆಚ್/ಸಿಟಿಎ/ಎಇ–1/¹DgïJ¥ï/ಅಲ್ಪಾವಧಿ ಟೆಂಡರ್/2009–10/1089, ಚಿತ್ರದುರ್ಗ, ದಿನಾಂಕ:14ನೇ ಆಗಸ್ಟ್ 2009**

**ಇ–ಪ್ರೊಕ್ಯೂರ್‌ಮೆಂಟ್ ಪ್ರಕ್ರಿಯೆಯಡಿಯಲ್ಲಿಯ ಅಲ್ಪಾವಧಿ ಟೆಂಡರ್ ಎರಡನೇ ಕರೆ**

**(ಎರಡು ಲಕೋಟೆ ಪದ್ಧತಿ)**

ಕರ್ನಾಟಕ ರಾಜ್ಯ ರಾಜ್ಯಪಾಲರ ಹೆಸರಿನಲ್ಲಿ ಕಾರ್ಯಪಾಲಕ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ ವಿಭಾಗ ಚಿತ್ರದುರ್ಗ ಕಛೇರಿಯಿಂದ ಕೆಳಕಂಡ ಕಾಮಗಾರಿಗಳಿಗೆ ಅರ್ಹ ಗುತ್ತಿಗೆದಾರರಿಂದ ಇ–ಪ್ರೊಕ್ಯೂರ್‌ಮೆಂಟ್ ಪ್ರಕ್ರಿಯೆಯಡಿಯಲ್ಲಿಯ ಅಲ್ಪಾವಧಿ ಟೆಂಡರ್ ಅನ್ನು ಕರೆಯಲಾಗಿದೆ.

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಟೆಂಡರ್‌ಗೆ ಇಡಲಾದ ಅಂದಾಜು ಮೊತ್ತ ರೂ. ಗಳಲ್ಲಿ | ಇ.ಎಂ.ಡಿ ಮೊತ್ತ ರೂ.ಗಳಲ್ಲಿ |
|---|---|---|---|
| 1 | ರಾಜ್ಯ ಹೆದ್ದಾರಿ 132ರಲ್ಲಿ ಕಿ.ಮೀ. 90.85 ರಿಂದ 100.85 ಕಿ.ಮೀವರೆಗೆ ಬಳ್ಳಾರಿ ಮೋಕಾ ಮಂತ್ರಾಲಯ ರಸ್ತೆ ಅಭಿವೃದ್ಧಿ ಕೆಲಸ. | 23674657–00 | 356000–00 |

ಟೆಂಡರ್ ಬಗ್ಗೆ ವಿಚಾರಿಸಲು/ಮಾಹಿತಿ ಪಡೆಯಲು ಕೊನೆಯ ದಿನಾಂಕ : 25–08–2009 ಸಮಯ: 16.30

ಪ್ರಿ ಬಿಡ್ ಮೀಟಿಂಗ್ ಕರೆಯುವ ದಿನಾಂಕ: 26–08–2009 ಸಮಯ: 11.00

ಟೆಂಡರ್ ಸಲ್ಲಿಸುವ ಅಂತಿಮ ದಿನಾಂಕ ಮತ್ತು ವೇಳೆ : 28–08–2009 ಸಮಯ: 16.00

ತಾಂತ್ರಿಕ ಬಿಡ್ ಅನ್ನು ತೆರೆಯುವ ದಿನಾಂಕ ಮತ್ತು ವೇಳೆ : 31–08–2009 ಸಮಯ: 11.00

ಆರ್ಥಿಕ ಬಿಡ್‌ಅನ್ನು ತೆರೆಯುವ ದಿನಾಂಕ ಮತ್ತು ವೇಳೆ : 03–09–2009 ಸಮಯ: 11.00

ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕಾರ್ಯಪಾಲಕ ಅಭಿಯಂತರರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಕಛೇರಿ ವೇಳೆಯಲ್ಲಿ ಅಥವಾ ಸರ್ಕಾರಿ ವೆಬ್‌ಸೈಟ್ : http://eproc.karnataka.gov.in. ಅನ್ನು ಸಂಪರ್ಕಿಸಬಹುದಾಗಿದೆ.

ಕಾರ್ಯಪಾಲಕ ಅಭಿಯಂತರರು,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

**PUBLIC WORKS, PORTS & INLAND WATER TRANSPORT DEPARTMENT**

**Office of the Executive Engineer, National Highway Division, Chitradurga**

**No.ENH/CTA/AE-1 /T.Noti/CRF/2009-10/1089, Chitradurga, Dated: 14th August 2009**

**2nd SHORT TERM TENDER NOTIFICATION UNDER E-PROCUREMENT**

**(Two Cover System)**

Tender is invited from the qualified bidders for the following works under E-procurement procedure.

| Sl No | Name of Work | Amount put to tender Amount in Rs | Bid Security /EMD. Amount in Rs |
|---|---|---|---|
| 1 | Improvements to Bellary-Moka-Mantralaya road (SH-132)KM 90.85 to 100.85 in Bellary Taluk, Bellary District. | 23674657-00 | 356000-00 |

Last Date & Time for Tender Queries/ Clarifications : 25-08-2009 at 16.00 PM

Pre bid meeting will be held on 26-08-2009 : At 11.00 A.M.

Last Date & Time for receipt of tenders : 28-08-2009 at 16.00

Date & Time for Opening of Technical Bid 31-08-2009 at 11.00

Date & Time for Opening of Financial Bid : 3-09-2009 at 11.00

Further details can be had from the office of the Executive Engineer, National Highway Division, Chitradurga, during working hours and in Government Website: http://eproc.karnataka.gov.in.

P.R. 677 Executive Engineer, NH Dn., Chitradurga.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು**

**ಟೆಂಡರ್–ಕಂ–ಹರಾಜು/ಹರಾಜು ಪ್ರಕಟಣೆ**

**ಎ1:ಬಿಯುಡಿ:ನೀನೆತೋ:ಕತ್ರಾವಣೆ:ವಿವ:27/2009–10, ದಿನಾಂಕ:13ನೇ ಆಗಸ್ಟ್ 2009**

ಈ ಮೂಲಕ ನೋಂದಾಯಿತ ಅರಣ್ಯ ಗುತ್ತಿಗೆದಾರರಿಗೆ/ಸ್ಥಳೀಯ ಮಾರಾಟಗಾರರಿಗೆ ತಿಳಿಯಪಡಿಸುವುದೇನೆಂದರೆ ತುಮಕೂರು ಸಾಮಾಜಿಕ ಅರಣ್ಯ ವಿಭಾಗಕ್ಕೆ ಸಂಬಂಧಿಸಿದ ಈ ಕೆಳಕಂಡ ಸ್ಥಳದಲ್ಲಿರುವ ನೀಲಗಿರಿ ಮರಗಳನ್ನು ಈ ಕೆಳ ಸಹಿದಾರರಾಗಲಿ ಅಥವಾ ಈ ಸಂಬಂಧವಾಗಿ ಅಧಿಕಾರ ಪಡೆದ ಇತರೆ ಅಧಿಕಾರಿಗಳಾಗಲೀ ಈ ಕೆಳಗೆ ನಮೂದಿಸಿರುವ ದಿನಾಂಕ ಹಾಗೂ ಸಮಯದಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ಉಪವಿಭಾಗ ಕಛೇರಿ ಆವರಣ, ತಿಪಟೂರು ಇಲ್ಲಿ ಸಂಪೂರ್ಣ ಹರಾಜು ಇಸ್ತಿಹಾರಿನ ಷರತ್ತುಗಳಿಗನುಸಾರವಾಗಿ ಹರಾಜು ಮಾಡಲಾಗುವುದು. ಇಚ್ಛೆಯುಳ್ಳ ನೋಂದಾಯಿತ ಅರಣ್ಯ ಗುತ್ತಿಗೆದಾರರು ಮತ್ತು ಸಾರ್ವಜನಿಕರು ಸದರಿ ಹರಾಜಿನಲ್ಲಿ ಭಾಗವಹಿಸಬಹುದು.

| ಯುನಿಟ್ ಸಂಖ್ಯೆ | ವಲಯ | ಗ್ರಾಮ ಪಂಚಾಯಿತಿ ಹೆಸರು | ಹರಾಜಿಗೆ ಇಡಲಾಗಿರುವ ಉತ್ಪನ್ನಗಳ ವಿವರಗಳು | ಅಂದಾಜು ವಿಸ್ತೀರ್ಣ | ಹರಾಜು ನಡೆಸುವ ದಿನಾಂಕ | ಮರಗಳ ಜಾತಿ |
|---|---|---|---|---|---|---|
| 1 | ತಿಪಟೂರು | ಈಡೇನಹಳ್ಳಿ | ಈಡೇನಹಳ್ಳಿ ಸರ್ವೆ ನಂ.79ರಲ್ಲಿ ಕರ್ನಾಟಕ ಗೃಹ ಮಂಡಳಿ ವ್ಯಾಪ್ತಿಗೆ ಒಳಪಟ್ಟಿರುವ 25ಎಕರೆ ಪ್ರದೇಶದಲ್ಲಿರುವ ಸುಮಾರು 150 ನೀಲಗಿರಿ ಮರಗಳು | 150 ಮರಗಳು | 04.09.2009 | ನೀಲಗಿರಿ |

ಮೇಲ್ಕಂಡಂತೆ ನಿಗದಿ ಪಡಿಸಿದ ದಿನಾಂಕದಂದು ನಡೆಸುವ ಹರಾಜಿನಲ್ಲಿ ಬಿಡ್ಡುದಾರರು ಭಾಗವಹಿಸದೇ ಇದ್ದಲ್ಲಿ ಅಥವಾ ಹರಾಜನ್ನು ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ದಿನಾಂಕ: 11–09–2009 ರಂದು ನಡೆಸಲಾಗುವುದು. ಈ ರೀತಿಯ ಮರು ಹರಾಜಿಗೆ ಪುನಃ ಯಾವುದೇ ಪ್ರಕಟಣೆ ನೀಡಲಾಗುವುದಿಲ್ಲ.

**ಷರತ್ತುಗಳು**

1. ಟೆಂಡರ್‌ನಲ್ಲಿ ಭಾಗವಹಿಸುವ ಬಿಡ್ಡುದಾರರು ಪ್ರತಿ ಲಾಟಿಗೆ ಇ.ಎಂ.ಡಿ. ಬಾಬ್ತು ರೂ. 25000/– (ಇಪ್ಪತ್ತೈದು ಸಾವಿರ) ಗಳ ಡಿ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು ರವರ ಹೆಸರಿಗೆ ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕಿನಿಂದ ತೆಗೆದು ಸಲ್ಲಿಸುವುದು.
2. ಟೆಂಡರ್ / ಹರಾಜನ್ನು ಸ್ಥಳವಾರು ಮಾಡಲಾಗುವುದು. ಬಿಡ್ಡುದಾರರು ಪ್ರತಿ ನೆಡುತೋಪಿಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸುವುದು.
3. ಬಿಡ್ಡು / ಟೆಂಡರ್‌ದಾರರು ಒಂದು ಯೂನಿಟ್‌ನಲ್ಲಿ ಬರುವ ಒಟ್ಟು ಮರಗಳಿಗೆ ದರವನ್ನು ಸೂಚಿಸತಕ್ಕದ್ದು.
4. ನೆಡುತೋಪಿನಲ್ಲಿರುವ ಮರಗಳು ಯಾವ ಸ್ಥಿತಿಯಲ್ಲಿರುತ್ತದೆಯೋ ಅದೇ ಸ್ಥಿತಿಯಲ್ಲಿ ಟೆಂಡರ್ ಮಾಡಲಾಗುವುದು.
5. ಸ್ಯಾಂಪಲ್ ಪ್ಲಾಟ್‌ಗಳನ್ನು ರಚಿಸಿದ ಮರಗಳ ಗಣತಿಯು ಅಂದಾಜಿನಂತಿರುತ್ತದೆ.
6. ಹರಾಜು ಅಥವಾ ಟೆಂಡರ್ ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜಿನ ಪೂರ್ಣ ಮೊತ್ತ ಹಾಗೂ ಪೂರ್ಣ ತೆರಿಗೆಗಳನ್ನು ಸ್ಥಳದಲ್ಲಿಯೇ ಪಾವತಿಸುವುದು. ತಪ್ಪಿದಲ್ಲಿ ಇಎಂಡಿಯನ್ನು ಮುಟ್ಟುಗೋಲು ಹಾಕಿಕೊಂಡು ಮರು ಹರಾಜು ಮಾಡಲಾಗುವುದು. ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಮೂಲ ಬಿಡ್ಡುದಾರರು ಜವಾಬ್ದಾರರಾಗಿರುತ್ತಾರೆ. (ಹಾಲಿ ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಬೇಕು).
7. ಹರಾಜಿನಲ್ಲಿ ಖರೀದಿಸಿದ ಮರಗಳನ್ನು ತೆಗೆಯುವಾಗ ಯಾವುದೇ ಖಾಸಗಿ ಅಥವಾ ಸರ್ಕಾರಿ ಆಸ್ತಿ ಪಾಸ್ತಿಗೆ ನಷ್ಟ ಉಂಟಾದಲ್ಲಿ ಬಿಡ್ಡುದಾರರೇ ನೇರ ಜವಾಬ್ದಾರರಾಗಿರುತ್ತಾರೆ.
8. ನೆಡುತೋಪಿನಲ್ಲಿ ವಲಯ ಅರಣ್ಯಾಧಿಕಾರಿಗಳು ಮಾರ್ಕ್ ಮಾಡಿರುವ ಮರಗಳ ನೆಡುತೋಪನ್ನು ಮಾತ್ರ ಕಡಿಯಬೇಕು.
9. ಟೆಂಡರ್–ಕಂ –ಹರಾಜು ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜು ಸ್ಥಿರೀಕರಿಸಿಕೊಂಡು ಭದ್ರತಾ ಠೇವಣಿ ನೀಡಿ ಕತ್ತಾವಣೆ ಆದೇಶ ಪಡೆದು ನಂತರ ಕತ್ತಾವಣೆ ಪ್ರಾರಂಭಿಸುವುದು.
10. ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿರವರಿಗೆ ಸೇರಿರುತ್ತವೆ.
11. ಹೆಚ್ಚಿನ ವಿವರಗಳನ್ನು ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.
12. ಆ ದಿನ ಬೆಳಿಗ್ಗೆ 12:00 ಗಂಟೆಯಿಂದ ಪ್ರಾರಂಭಿಸಿ ಅಪರಾಹ್ನ 2:00 ಗಂಟೆಯವರೆಗೆ ಟೆಂಡರ್ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ನಂತರ 3:30ಕ್ಕೆ ಹರಾಜು ಪ್ರಕ್ರಿಯೆಯನ್ನು ಪ್ರಾರಂಭಿಸಲಾಗುವುದು.
13. ಸ್ವೀಕರಿಸಲಾದ ಟೆಂಡರುಗಳನ್ನು ಅದೇ ದಿನಾಂಕದಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಹರಾಜು ಪ್ರಕ್ರಿಯೆ ಪೂರ್ಣಗೊಂಡ ನಂತರ ಅಪರಾಹ್ನ 5:00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
14. ಅಂಗೀಕರಿಸಿದ ಬಿಡ್ಡುದಾರರು ಬಿಡ್ಡಿನ ಮೊತ್ತಕ್ಕೆ / ಟೆಂಡರ್ ಮೊತ್ತಕ್ಕೆ ಶೇ 8 % ರಷ್ಟು ಅರಣ್ಯಾಭಿವೃದ್ಧಿ ತೆರಿಗೆ (FDT) ಯನ್ನು ಹಾಗೂ ಬಿಡ್ಡಿನ ಮೊತ್ತ, ಅರಣ್ಯಾಭಿವೃದ್ಧಿ ತೆರಿಗೆ ಇವೆರಡರ ಮೇಲೆ ಶೇ 12.5 % ರಷ್ಟು ವ್ಯಾಟ್ ಹಾಗೂ ಈ ಮೂರರ ಮೊತ್ತದ ಮೇಲೆ ಶೇ 2.5% ರಷ್ಟು ಆದಾಯ ತೆರಿಗೆ, ಆದಾಯ ತೆರಿಗೆ ಮೇಲೆ ಶೇ 10% ರಷ್ಟು ಸರ್‌ಚಾರ್ಜ್ ಹಾಗೂ ಇವೆರಡರ ಮೇಲೆ ಎಜುಕೇಷನ್ ಸೆಸ್ ಶೇ. 3% ರಷ್ಟು ಪೂರ್ಣ ತೆರಿಗೆಯನ್ನು ಪಾವತಿಸಬೇಕು.
15. ಬಿಡ್ಡುದಾರರು ಹರಾಜಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚೆ ಸದರಿ ನೆಡುತೋಪುಗಳನ್ನು ಸ್ಥಳದಲ್ಲಿ ವೀಕ್ಷಿಸಿ ಭಾಗವಹಿಸತಕ್ಕದ್ದು.
16. ನೆಡುತೋಪಿನಲ್ಲಿರುವ ಮರಗಳ ಸಂಖ್ಯೆ ಸ್ಯಾಂಪಲ್ ಪ್ಲಾಟ್ ರಚಿಸಿರುವ ಮರಗಳ ಗಣತಿಯ ಅಂದಾಜಿನಂತಿರುತ್ತದೆ.
17. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಆಯಾ ತಾಲ್ಲೂಕಿನ ಎಲ್ಲಾ ಲಾಟುಗಳಿಗೆ ರೂ. 25000/– (ಇಪ್ಪತ್ತೈದು ಸಾವಿರ) ಡಿ.ಡಿ. ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು ಇವರ ಹೆಸರಿಗೆ ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕಿನಿಂದ ಖರೀದಿಸಿ ಸಲ್ಲಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 678

ಸಾಮಾಜಿಕ ಅರಣ್ಯ ವಿಭಾಗ, ತುಮಕೂರು.

**INFRASTRUCTURE DEVELOPMENT DEPARTMENT**

**Room No.24, Ground Floor, West Gate, Vikasa Soudha, Bangalore**

**STATE TENDER BULLETIN**

**No. IDD 115 ITS 2009, Bangalore, Dated: 13th August 2009**

Following Tender Notice is hereby published as part of State Tender Belletin for the months of August 2009. The Tender Notification for the work: Invitation for Bids for DFBOT Projects. With regard to Development of Karnataka State Highway – 132 on DBOT basis – request for Tender documents.

The Details of the Tender may be downloaded from e-procurement portal of GoK viz. http://eproc.karnataka.gov.in from 24.08.09 to 26.10.09.

**T.B. RENUKA PRASAD**

Deputy Secretary to Government, Infrastructure Development Department.

**KARNATAKA STATE HIGHWAYS IMPROVEMENT PROJECT**

**(Public Works Department)**

**No: KSHIP / IDD / SH-132 MOKA/966, Dated: 11th August 2009**

**INVITATION FOR BIDS FOR DFBOT PROJECTS**

**Sub:** Development of Karnataka State Highway-132 on DBOT basis.

**Ref:** This office tender notification Pubished in the daily news paper Prajavani, The economic Times, The times of India etc, on 4th Feb 2009.

1. In continuation of notification at reference above, the following is issued.
2. The Karnataka State Highways Improvement Project (KSHIP) has been authorized by the Government of Karnataka (GOK) vide Govt order No ID/115/ITS/2008 dated 17.07.2009 to be nodal agency for this Project. On behalf of GOK, we invite the bids from the eligible tenderers for Development of State Highway-132 from Bellary city to Andhra Pradesh (AP) border Ch.72.45 to Ch.98.81 (approximately 26.4 kms) via proposed Green field Airport at Sangonkallu, to a four lane road, and from Km 0.000 to Km 3.4000 from Karnataka state border to Chatra Gudi in the State of Andhra Pradesh to a Two lane road / Intermediate lane, on Design, Finance Build, Operate and Transfer basis (DBOT) through e-procurement.
3. Tender documents may be downloaded from the e-procurement portal of the Government of Karnataka Viz http:// eproc.karnataka.gov.in from 24.08.2009 to 26.10.2009.
4. Eligible bidders are requested to attend the Pre – bid meeting on the date indicated in the bid document and submit the Bids along with the prescribed Bid Security on line through e-procurement portal on or before last date of submission as prescribed in the Bid document. The opening of the tenders will be as per the e-procurement portal guidelines.
5. Contact office of the **PROJECT DIRECTOR PIU KSHIP KR CIRCLE BANGALORE** for further information, and log on to e-procurement portal for further updates.

P.R. 668 Project Director, PIU, KSHIP, Bangalore.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಟೆಂಡರ್ ಪ್ರಕಟಣೆ**

**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–2 ರ)**

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ./ಟೆಂಡರ್/2009–10/2765, ದಿನಾಂಕ: 13ನೇ ಆಗಸ್ಟ್ 2009**

1 ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ" ಇವರಿಂದ ಆಹ್ವಾನಿಸಲಾಗಿದೆ. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.

2. ದಿನಾಂಕ:07.09.09 ರಿಂದ 10.09.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಈ ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.
3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಈ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದ್ದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.
4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 17.09.09ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಅಂದೇ 16.30 ಘಂಟೆಗೆ ಅಥವಾ ಬೇರೆ ಸೂಕ್ತ ದಿನಾಂಕದಂದು ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.
5. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ-2)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ.ಗಳಲ್ಲಿ) | ಟೆಂಡರ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | 2 | 3 | 4 | 5 | 6 |
| 1 | ಬೆಳಗಾವಿ ಜಿಲ್ಲೆ ಖಾನಾಪೂರ ತಾಲ್ಲೂಕಿನ ಪಾರಿಶ್ವಾಡ-ದೇವಲತ್ತಿ ಗ್ರಾಮದ ಹತ್ತಿರ ಬಾಂಧಾರ ನಿರ್ಮಾಣ. | 47.39 | 94800/- | 4800 +Tax | 6 ತಿಂಗಳು (ಮಳೆಗಾಲ ಸೇರಿ) |

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 674 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

**FORM - I**

**(See Rule-9)**

**ಕಾರಾಗೃಹಗಳ ಇಲಾಖೆ**

**NOTIFICATION**

Shri **BHIMAPPA AYYAPPA HARIJAN** Working as WARDER in the Prisons Department of / Office of Superintendent Dist. Prison Bidar is permitted to change his name to **BHIMAPPA AYYAPPA DODDAMANI**

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು
ಕಾರಾಗೃಹಗಳ ಮಹಾನಿರೀಕ್ಷಕರು

ಪಿ.ಡಿ. 127